(২৫)

# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 644
2. ಸದಸ್ಯರ ಹೆಸರು : ಶ್ರೀ ಎಂ.ಪಿ. ಸುನೀಲ್ ಸುಬ್ರಮಣಿ
3. ಉತ್ತರಿಸಬೇಕಾದ ದಿನಾಂಕ : 24.09.2020
4. ಉತ್ತರಿಸುವ ಸಚಿವರು : ಮುಖ್ಯಮಂತ್ರಿ

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಸಚಿವಾಲಯದ ನೌಕರರುಗಳಿಗೆ ಒಂದು ಇಲಾಖೆಯಲ್ಲಿ ಗರಿಷ್ಠ ಮೂರು ವರ್ಷಗಳ ಮೇಲ್ಪಟ್ಟು ಮುಂದುವರೆಯಲು ಯಾವುದಾದರೂ ನಿಯಮಗಳು ಇವೆಯೇ: | ಸರ್ಕಾರಿ ನೌಕರರ ವರ್ಗಾವಣೆ/ನಿಯೋಜನೆಗಳನ್ನು ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 22 ಸೇನೌವ 2013 ದಿನಾಂಕ: 07.06.2013ರನ್ವಯ ನಿಯಂತ್ರಿಸಲಾಗುತ್ತಿದೆ. ಈ ಆದೇಶದಲ್ಲಿ ಸರ್ಕಾರಿ ನೌಕರರ ವರ್ಗಾವಣಾ ಮಾರ್ಗಸೂಚಿಗಳನ್ನು ಹೊರಡಿಸಲಾಗಿದೆ. ಈ ಮಾರ್ಗಸೂಚಿಗಳು ಸಚಿವಾಲಯದ ನೌಕರರುಗಳಿಗೂ ಅನ್ವಯವಾಗುತ್ತವೆ. |
| (ಆ) | ನೌಕರರುಗಳಿಗೆ ಮೂರು ವರ್ಷಗಳ ನಂತರ ಒಂದು ಇಲಾಖೆಯಿಂದ ಬೇರೊಂದು ಇಲಾಖೆಗೆ ವರ್ಗಾಯಿಸಲು ಇರುವ ತೊಡಕುಗಳೇನು: (ವಿವರ ನೀಡುವುದು) | ಕರ್ನಾಟಕ ಸರ್ಕಾರ ಸಚಿವಾಲಯವು ಕ್ಷೇತ್ರ ಇಲಾಖೆಗಳಿಗಿಂತ ಭಿನ್ನವಾಗಿದ್ದು, ಕ್ಷೇತ್ರ ಇಲಾಖೆಗಳಂತೆ ಸರ್ಕಾರದ ನೀತಿ ಮತ್ತು ಕಾರ್ಯಕ್ರಮಗಳನ್ನು ಕಾರ್ಯರೂಪಕ್ಕೆ ತರುವುದಕ್ಕೆ ಮಾತ್ರ ಸಂಬಂಧಿಸಿರದೆ, ವಿಭಿನ್ನವಾದ ಪಾತ್ರವನ್ನು ಹೊಂದಿದೆ. ಅಲ್ಲದೆ ಕರ್ನಾಟಕ ಸರ್ಕಾರ ಸಚಿವಾಲಯವು ಏಕ ಘಟಕ ಕಛೇರಿಯಾಗಿರುತದೆ. ಆದ್ದರಿಂದ, ಇಲ್ಲಿನ ಸಿಬ್ಬಂದಿಯ ವರ್ಗಾವಣೆಯನ್ನು ವರ್ಗಾವಣೆ ಬದಲಾಗಿ 'ಚಲನವಲನ' ಎಂದು ಪರಿಗಣಿಸಲಾಗುತ್ತದೆ. ಕರ್ನಾಟಕ ಸರ್ಕಾರ ಸಚಿವಾಲಯದ ಇಲಾಖೆಗಳನ್ನು ವಿವಿಧ ಪ್ರವರ್ಗಗಳಾಗಿ ವಿಂಗಡಿಸಲಾಗಿದ್ದು, ಆಯಾ ಪ್ರವರ್ಗದ ಇಲಾಖೆಗಳಲ್ಲಿ ನೌಕರರು ಇರಬಹುದಾದ ಕನಿಷ್ಠ ಮತ್ತು ಗರಿಷ್ಠ ಅವಧಿಯನ್ನು ನಿಗದಿಗೊಳಿಸಲಾಗಿದೆ. ಮುಂದುವರಿದು, ಕರ್ನಾಟಕ ಸರ್ಕಾರ ಸಚಿವಾಲಯದ ಪ್ರತಿ ಇಲಾಖೆಯು ತನಗೆ ಹಂಚಿಕೆ ಮಾಡಲಾದಂತೆ ಕೆಲವು ವಿಶಿಷ್ಟ ಚಟುವಟಿಕೆಗಳು, ಅಧಿನಿಯಮಗಳು, ನಿಯಮಗಳು, ವಿನಿಯಮಗಳು ಮುಂತಾದವುಗಳ ಬಗ್ಗೆ ವ್ಯವಹರಿಸುತ್ತದೆ. ಕರ್ನಾಟಕ ಸರ್ಕಾರ ಸಚಿವಾಲಯದ ಒಂದು ಇಲಾಖೆಗೆ ಹಂಚಿಕೆ ಮಾಡಲಾದ ನೌಕರ/ ಸಿಬ್ಬಂದಿಯು ಇಲಾಖೆಗೆ ಸಂಬಂಧಿಸಿದ ಕೆಲಸದ ಪರಿಚಯ ಪಡೆಯಲು ಹಾಗೂ ಪ್ರಾವೀಣ್ಯತೆ ಹೊಂದಲು ಮತ್ತು ತನಗೆ ಹಂಚಿಕೆ ಮಾಡಲಾದ ಕೆಲಸದಲ್ಲಿ ನೈಪುಣ್ಯತೆಯನ್ನು ಪಡೆಯಲು ಸಕಾರಣವಾದ ಕಾಲಾವಕಾಶ ಬೇಕಾಗುತ್ತದೆ. |
| (ಇ) | ಸಚಿವಾಲಯದ ನೌಕರರುಗಳಿಗೆ ಇರುವ ನೀತಿ/ ನಿಯಮಗಳ ಕೃಪಿಡಿಯನ್ನು ಒದಗಿಸುವುದು.? | ಸಚಿವಾಲಯದ ಅಧಿಕಾರಿ/ನೌಕರರ ಚಲನವಲನಕ್ಕೆ ಸಂಬಂಧಿಸಿದಂತೆ, ಮಾರ್ಗಸೂಚಿಗಳನ್ನೊಳಗೊಂಡ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 22 ಸೇನೌವ 2013 ದಿನಾಂಕ: 07.06.2013ರ ಅನುಬಂಧ-1 ರ ಪ್ರತಿಯನ್ನು ಒದಗಿಸಿದೆ. |

ಸಂಖ್ಯೆ: ಸಿಆಸುಇ 11 ಸೇನೌವ 2020

ಬಿ.ಎಸ್. ಯಡಿಯೂರಪ್ಪ

(ಬಿ.ಎಸ್. ಯಡಿಯೂರಪ್ಪ)
ಮುಖ್ಯಮಂತ್ರಿ

ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ ೨೨ ಸೇನೌವ ೨೦13 ದಿನಾಂಕ: 07.06.೨೦13

## ಅನುಬಂಧ-1

### ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿಯ ಚಲನವಲನ

1. ಕರ್ನಾಟಕ ಸರ್ಕಾರ ಸಚಿವಾಲಯವು ಕ್ಷೇತ್ರ ಇಲಾಖೆಗಳಿಗಿಂತ ಭಿನ್ನವಾಗಿದ್ದು, ಕ್ಷೇತ್ರ ಇಲಾಖೆಗಳಂತೆ ಸರ್ಕಾರದ ನೀತಿ ಮತ್ತು ಕಾರ್ಯಕ್ರಮಗಳನ್ನು ಕಾರ್ಯರೂಪಕ್ಕೆ ತರುವುದಕ್ಕೆ ಮಾತ್ರ ಸಂಬಂಧಿಸಿರದೆ, ವಿಭಿನ್ನವಾದ ಪಾತ್ರವನ್ನು ಹೊಂದಿದೆ, ಅಂದರೆ, ಯೋಜನೆಗಳನ್ನು ರೂಪಿಸುವುದು (ಪಂಚವಾರ್ಷಿಕ ಯೋಜನೆಯೂ ಒಳಗೊಂಡಂತೆ) ಕಾರ್ಯನೀತಿ, ತಜ್ಞ/ತಾಂತ್ರಿಕ ಸಲಹೆಯನ್ನು ಕಾನೂನು, ಸಿಬ್ಬಂದಿ, ಆರ್ಥಿಕ ಮತ್ತು ಇತರ ವಿಷಯಗಳಲ್ಲಿ ಒದಗಿಸುವುದು ಹಾಗೂ ಸರ್ಕಾರದ ಭಂಡಾರದಂತೆ ಕಾರ್ಯನಿರ್ವಹಿಸುವುದೂ ಒಳಗೊಂಡಂತೆ ಕೇಂದ್ರ ಸರ್ಕಾರದೊಂದಿಗೆ / ಬಾಹ್ಯ ಏಜೆನ್ಸಿಗಳೊಂದಿಗೆ ವ್ಯವಹರಿಸುವುದು. ಅಲ್ಲದೆ ಕರ್ನಾಟಕ ಸರ್ಕಾರ ಸಚಿವಾಲಯವು ಏಕ ಘಟಕ ಕಛೇರಿ. ಆದುದರಿಂದ, ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿಗೆ ಸಂಬಂಧಿಸಿದಂತೆ 'ವರ್ಗಾವಣೆ' ಪದಕ್ಕೆ ಬದಲಾಗಿ 'ಚಲನವಲನ' ಪದವನ್ನು ಬಳಸಲಾಗಿದೆ.

2. ಕರ್ನಾಟಕ ಸರ್ಕಾರ ಸಚಿವಾಲಯದ ಸೇವೆಗೆ ಸೇರಿದ ಸಿಬ್ಬಂದಿಯ ಚಲನವಲನದ ಉದ್ದೇಶಕ್ಕಾಗಿ ಕರ್ನಾಟಕ ಸರ್ಕಾರ ಸಚಿವಾಲಯದ ವಿವಿಧ ಇಲಾಖೆಗಳನ್ನು 4 ಪ್ರವರ್ಗಗಳಾಗಿ ವಿಂಗಡಿಸಲಾಗಿದೆ. ಅಂದರೆ ಕೆಳಗೆ ನಿರ್ದಿಷ್ಟಪಡಿಸಿರುವಂತೆ:- ಅಭಿವೃದ್ಧಿ ಇಲಾಖೆಗಳು, ನಿಯಂತ್ರಿಸುವ ಇಲಾಖೆಗಳು, ಸೇವಾ ಇಲಾಖೆಗಳು ಮತ್ತು ತಾಂತ್ರಿಕ / ಪರಿಣಿತ ಇಲಾಖೆಗಳು.

| ಅಭಿವೃದ್ಧಿ ಇಲಾಖೆಗಳು | ನಿಯಂತ್ರಣಾ ಇಲಾಖೆಗಳು | ಸೇವಾನಿರತ ಇಲಾಖೆಗಳು | ತಾಂತ್ರಿಕ / ಪರಿಣಿತ ಇಲಾಖೆಗಳು |
|---|---|---|---|
| 1) ಕೃಷಿ | 1) ಸಹಕಾರ | 1) ಶಿಕ್ಷಣ | 1) ಕಾನೂನು |
| 2) ತೋಟಗಾರಿಕೆ | 2) ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ (ಸಿಆಸು ಇಲಾಖೆಯ ಸೇವಾ ನಿಯಮಗಳು ವಿಭಾಗವನ್ನು ಹೊರತುಪಡಿಸಿ) | 2) ಆರೋಗ್ಯ ಮತ್ತು ಕುಟುಂಬ ಕಲ್ಯಾಣ | 2) ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ |
| 3) ಪಶುಸಂಗೋಪನೆ ಮತ್ತು ಮೀನುಗಾರಿಕೆ | 3) ಇಂಧನ | 3) ವಸತಿ | 3) ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ |
| 4) ವಾಣಿಜ್ಯ ಮತ್ತು ಕೈಗಾರಿಕೆ | 4) ಆಹಾರ ಮತ್ತು ನಾಗರಿಕ ಸರಬರಾಜು ಮತ್ತು ಗ್ರಾಹಕ ವ್ಯವಹಾರಗಳು | 4) ಪ್ರವಾಸೋದ್ಯಮ | 4) ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಮತ್ತು ವಿಜ್ಞಾನ ಮತ್ತು ತಂತ್ರಜ್ಞಾನ |
| 5) ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲ ಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ | 5) ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ | 5) ಯುವಜನಸೇವಾ | 5) ಸಿಆಸು ಇಲಾಖೆಯ ಸೇವಾ ನಿಯಮಗಳು ವಿಭಾಗ |
| 6) ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ | 6) ಒಳಾಡಳಿತ | 6) ಮೂಲಸೌಕರ್ಯ ಅಭಿವೃದ್ಧಿ | 6) ಆರ್ಥಿಕ |
| | 7) ಸಾರಿಗೆ | 7) ಜಲಸಂಪನ್ಮೂಲ | |
| | 8) ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಇಲಾಖೆ | 8) ವೈದ್ಯಕೀಯ ಶಿಕ್ಷಣ | |

| | | | |
|---|---|---|---|
| | 9) ಕಾರ್ಮಿಕ | 9) ಸಮಾಜ ಕಲ್ಯಾಣ | |
| | 10) ಕಂದಾಯ | 10) ಸಾರ್ವಜನಿಕ ಉದ್ದಿಮೆಗಳು | |
| | 11) ನಗರಾಭಿವೃದ್ಧಿ | | |

3. ಕರ್ನಾಟಕ ಸರ್ಕಾರ (ವ್ಯವಹಾರ ಹಂಚಿಕೆ) ನಿಯಮಗಳು, 1977ರನ್ವಯ, ಕರ್ನಾಟಕ ಸರ್ಕಾರ ಸಚಿವಾಲಯದ ಪ್ರತಿ ಇಲಾಖೆಯ ಕಾರ್ಯವನ್ನು ಹಂಚಿಕೆ ಮಾಡಲಾಗಿದೆ. ಪ್ರತಿ ಇಲಾಖೆಯು ತನಗೆ ಹಂಚಿಕೆ ಮಾಡಲಾದಂತೆ ಕೆಲವು ವಿಶಿಷ್ಟ ಚಟುವಟಿಕೆಗಳು, ಅಧಿನಿಯಮಗಳು, ನಿಯಮಗಳು, ವಿನಿಯಮಯಗಳು ಮುಂತಾದವುಗಳ ಬಗ್ಗೆ ವ್ಯವಹರಿಸುತ್ತದೆ. ಕರ್ನಾಟಕ ಸರ್ಕಾರ ಸಚಿವಾಲಯದ ಒಂದು ಇಲಾಖೆಗೆ ಹಂಚಿಕೆ ಮಾಡಲಾದ ನೌಕರ ಸಿಬ್ಬಂದಿಯು ಇಲಾಖೆಗೆ ಸಂಬಂಧಿಸಿದ ಕೆಲಸದ ಪರಿಚಯ ಪಡೆಯಲು ಹಾಗೂ ಪ್ರಾವೀಣ್ಯತೆ ಹೊಂದಲು ಮತ್ತು ತನಗೆ ಹಂಚಿಕೆ ಮಾಡಲಾದ ಕೆಲಸದಲ್ಲಿ ನೈಪುಣ್ಯತೆಯನ್ನು ಪಡೆಯಲು ಸಕಾರಣವಾದ ಕಾಲಾವಕಾಶ ಬೇಕಾಗುತ್ತದೆ.

4. ಮೇಲೆ ತಿಳಿಸಿದ ಹಿನ್ನೆಲೆಯಲ್ಲಿ, ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿಯ ಚಲನವಲನ ಮತ್ತು ಅವರ ತರಬೇತಿಯನ್ನು ಕೆಳಗೆ ತಿಳಿಸಿದಂತೆ ನಿಯಂತ್ರಿಸಲಾಗುತ್ತದೆ:-

(ಅ) ಒಂದು ಇಲಾಖೆಯಲ್ಲಿ ಕನಿಷ್ಠ ಸೇವಾ ಅವಧಿಯು ಈ ಕೆಳಕಂಡಂತಿದೆ:-

| ಹುದ್ದೆ | ಅಭಿವೃದ್ಧಿ ಇಲಾಖೆಗಳು | | ನಿಯಂತ್ರಣಾ ಇಲಾಖೆಗಳು | | ಸೇವಾ ನಿರತ ಇಲಾಖೆಗಳು | | ತಾಂತ್ರಿಕ/ಪರಿಣಿತ ಇಲಾಖೆಗಳು | |
|---|---|---|---|---|---|---|---|---|
| | ಕನಿಷ್ಠ | ಗರಿಷ್ಠ | ಕನಿಷ್ಠ | ಗರಿಷ್ಠ | ಕನಿಷ್ಠ | ಗರಿಷ್ಠ | ಕನಿಷ್ಠ | ಗರಿಷ್ಠ |
| (1) | (2) | (3) | (4) | (5) | (6) | (7) | (8) | (9) |
| ಅಪರ / ಜಂಟಿ / ಉಪ ಕಾರ್ಯದರ್ಶಿ | 3ವರ್ಷಗಳು | 6ವರ್ಷಗಳು | 3ವರ್ಷಗಳು | 6ವರ್ಷಗಳು | 3ವರ್ಷಗಳು | 6ವರ್ಷಗಳು | 5ವರ್ಷಗಳು | ಮಿತಿ ಇಲ್ಲ |
| ಅಧೀನ ಕಾರ್ಯದರ್ಶಿ/ ಶಾಖಾಧಿಕಾರಿಗಳು | 3ವರ್ಷಗಳು | 6ವರ್ಷಗಳು | 3ವರ್ಷಗಳು | 6ವರ್ಷಗಳು | 3ವರ್ಷಗಳು | 6ವರ್ಷಗಳು | 5ವರ್ಷಗಳು | ಮಿತಿ ಇಲ್ಲ |
| ಹಿ. ಸಹಾಯಕರು/ ಸಹಾಯಕರು | 5ವರ್ಷಗಳು | 7ವರ್ಷಗಳು | 5ವರ್ಷಗಳು | 7ವರ್ಷಗಳು | 5ವರ್ಷಗಳು | 7ವರ್ಷಗಳು | 6ವರ್ಷಗಳು | ಮಿತಿ ಇಲ್ಲ |
| ಕಿ. ಸಹಾಯಕರು/ ಗ್ರೂಪ್-ಡಿ | 5ವರ್ಷಗಳು | 7ವರ್ಷಗಳು | 5ವರ್ಷಗಳು | 7ವರ್ಷಗಳು | 5ವರ್ಷಗಳು | 7ವರ್ಷಗಳು | 6ವರ್ಷಗಳು | 7ವರ್ಷಗಳು |

ಮೇಲೆ ತಿಳಿಸಿದ ಅವಧಿಯು ಕೆಳಗಿನ ಅಂಶ (ಆ)ರಲ್ಲಿ ತಿಳಿಸಿದ ತರಬೇತಿ ಅವಧಿಯನ್ನು ಹೊರತುಪಡಿಸಲಾಗಿದೆ.

(ಆ) ಸಹಾಯಕರು, ಹಿರಿಯ ಸಹಾಯಕರು, ಶಾಖಾಧಿಕಾರಿಗಳು, ಅಧೀನ ಕಾರ್ಯದರ್ಶಿಗಳು ಹುದ್ದೆಗಳನ್ನು ಹೊಂದಿದ ಕರ್ನಾಟಕ ಸರ್ಕಾರ ಸಚಿವಾಲಯದ ಸೇವೆಗೆ ಸೇರಿದ ಪ್ರತಿ ಸದಸ್ಯರನ್ನು ಕ್ಷೇತ್ರ ಇಲಾಖೆಗೆ 2 ವರ್ಷಗಳ ಅವಧಿಗೆ ಸೇವೆಗೆ ಸೇರಿದ 5 ವರ್ಷದ ಅವಧಿಯೊಳಗೆ ನಿಯೋಜಿಸತಕ್ಕದ್ದು.

ಪರಂತು, 52 ವರ್ಷ ವಯಸ್ಸು ಹೊಂದಿದವರನ್ನು ಈ ರೀತಿ ನಿಯೋಜಿಸತಕ್ಕದ್ದಲ್ಲ.

(ಇ) ಸಂಬಂಧಪಟ್ಟ ಸರ್ಕಾರದ ಪ್ರಧಾನ ಕಾರ್ಯದರ್ಶಿ / ಸರ್ಕಾರದ ಕಾರ್ಯದರ್ಶಿ ತಮ್ಮ ಇಲಾಖೆಯ ಅಧಿಕಾರಿಗಳನ್ನು ತಮ್ಮ ಇಲಾಖೆಯೊಳಗೆ ಸುತ್ತಿಸಬಹುದು.

(ಈ) ಆದರೂ, ಒಂದು ವೇಳೆ ಯಾವುದಾದರೂ ಇಲಾಖೆಯ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಯವರು ಮೇಲಿನ ಕಂಡಿಕೆ-5ರಲ್ಲಿ ಹೇಳಿರುವ ಕನಿಷ್ಠ ಅವಧಿಯನ್ನು ಪೂರೈಸದಿರುವ ಯಾವುದೇ ಒಬ್ಬ ಅಧಿಕಾರಿಯ ಸೇವೆಯನ್ನು ಸಿಆಸು ಇಲಾಖೆಗೆ ಹಿಂದಿರುಗಿಸಬೇಕೆಂದು ತೀರ್ಮಾನಿಸಿದಲ್ಲಿ ಅದಕ್ಕೆ ಸಕಾರಣಗಳನ್ನು ದಾಖಲಿಸಿ, ಸಿಆಸು ಇಲಾಖೆಯ ಪೂರ್ವಾನುಮತಿಯನ್ನು ಪಡೆಯಬೇಕು. ಆದರೆ ದುರ್ನಡತೆಯ ಆರೋಪವು ಯಾವುದೇ ಅಧಿಕಾರಿಯ ಸೇವೆಯನ್ನು ಸಿಆಸು ಇಲಾಖೆಗೆ ಹಿಂದಿರುಗಿಸಲು ಕಾರಣವಾಗುವುದಿಲ್ಲ. ಅಂತಹ ಪ್ರಕರಣಗಳಲ್ಲಿ ಸೂಕ್ತ ಶಿಸ್ತು ಕ್ರಮವನ್ನು ಪ್ರಾರಂಭಿಸಲು ಕ್ರಮ ತೆಗೆದುಕೊಳ್ಳಬೇಕು.

(ಉ) ಸಾಧ್ಯವಾದಷ್ಟು ಮಟ್ಟಿಗೆ ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿಯ ಚಲನವಲನವನ್ನು ಮೇಲಿನ ಕಂಡಿಕೆ-2ರಲ್ಲಿ ನಮೂದಿಸಿರುವ 4 ಪ್ರವರ್ಗಗಳಿಗೆ ಸೇರಿದ ಇಲಾಖೆಗಳಲ್ಲಿಯೇ ಮಾಡಲು ಖಾತರಿಪಡಿಸಿಕೊಳ್ಳತಕ್ಕದ್ದು.